ಸಾರ್ವಜನಿಕ

<u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 848

ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಎಸ್ ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 20.09.2021

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯಲ್ಲಿ ಇದುವರೆಗೂ ಕೋವಿಡ್ ಸೋಂಕಿಗೆ ತುತ್ತಾದವರ ಸಂಖ್ಯೆ ಎಷ್ಟು; | ದಿನಾಂಕ:01.03.2020 ರಿಂದ ದಿನಾಂಕ:15.09.2021ರ ವರೆಗೆ ಕೊಡಗು ಜಿಲ್ಲೆಯಲ್ಲಿ 36,090 ಜನರು ಕೋವಿಡ್-19 ಸೋಂಕಿಗೆ ತುತ್ತಾಗಿರುತ್ತಾರೆ. |
| ಆ | ಇವರಲ್ಲಿ ಸಂಪೂರ್ಣವಾಗಿ ಗುಣಮುಖರಾದವರು ಹಾಗೂ ಮೃತರಾದವರ ಸಂಖ್ಯೆ ಎಷ್ಟು; | ದಿನಾಂಕ:01.03.2020 ರಿಂದ 15.09.2021ರ ವರೆಗೆ ಕೊಡಗು ಜಿಲ್ಲೆಯಲ್ಲಿ 35236 ಜನರು ಸಂಪೂರ್ಣವಾಗಿ ಗುಣಮುಖರಾಗಿರುತ್ತಾರೆ ಹಾಗೂ 323 ಜನರು ಮರಣ ಹೊಂದಿರುತ್ತಾರೆ. |
| ಇ | ಜಿಲ್ಲೆಯಲ್ಲಿ ಕೋವಿಡ್ ಸೋಂಕಿಗೆ ಒಳಗಾಗಿ ಪ್ರಸ್ತುತ ಚಿಕಿತ್ಸೆ ಪಡೆಯುತ್ತಿರವವರ ಸಂಖ್ಯೆ ಎಷ್ಟು; | ಪ್ರಸ್ತುತ ದಿನಾಂಕ:15.09.2021ರಲ್ಲಿ ಇದ್ದಂತೆ ಕೊಡಗು ಜಿಲ್ಲೆಯಲ್ಲಿ 531 ಜನರು ಕೋವಿಡ್-19 ಚಿಕಿತ್ಸೆ ಪಡೆಯುತ್ತಿದ್ದಾರೆ. |
| ಈ | ಕೋವಿಡ್ ಸೋಂಕಿತರಿಗಾಗಿ ಕೊಡಗು ಜಿಲ್ಲೆಯಲ್ಲಿ ಒದಗಿಸಲಾಗಿರುವ ಸೌಲಭ್ಯಗಳೇನು; ಪ್ರಸುತ ಜಿಲ್ಲೆಯಲ್ಲಿನ ಸೌಲಭ್ಯಗಳನ್ನು ಬಳಸಿಕೊಂಡು, ಏಕಕಾಲದಲ್ಲಿ ಗರಿಷ್ಠ ಎಷ್ಟು ಜನ ಸೋಂಕಿತರಿಗೆ ವೈದ್ಯಕೀಯ ಸೇವೆ ಕಲ್ಪಿಸಲು ಸಾಧ್ಯವಿದೆ? (ವಿವರ ನೀಡುವುದು) | ಕೋವಿಡ್ ಸೋಂಕಿತರಿಗಾಗಿ ಕೊಡಗು ಜಿಲ್ಲೆಯಲ್ಲಿ ಒದಗಿಸಲಾಗುವ ಸೌಲಭ್ಯಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |

ಆಕುಕ 109 ಎಸ್‌ಬಿವಿ 2021.

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ-1

## ಕೋವಿಡ್ ಸೋಂಕಿತರಿಗಾಗಿ ಕೊಡಗು ಜಿಲ್ಲೆಯಲ್ಲಿ ಒದಗಿಸಲಾಗಿರುವ ಸೌಲಭ್ಯಗಳು:

- ಜಿಲ್ಲೆಯಲ್ಲಿ **1.06 ಕೋಟಿ** ವೆಚ್ಚದಲ್ಲಿ **ವೈರಾಣು ಟೆಸ್ಟಿಂಗ್ ಲ್ಯಾಬ್** ಸ್ಥಾಪಿಸಲಾಗಿದೆ.
- ಜಿಲ್ಲೆಯಲ್ಲಿ ಪ್ರತಿದಿನ ಸುಮಾರು **2600**ಕ್ಕಿಂತಲೂ ಅಧಿಕ **ಆರ್.ಟಿ.ಪಿ.ಸಿ.ಆರ್** ಮತ್ತು ಆಂಟಿಜನ್ ಟೆಸ್ಟ್ ಮಾಡಲಾಗುತ್ತಿದೆ.
- ಕೋವಿಡ್ ಪರೀಕ್ಷೆ ನಡೆಸುವ ಸಲುವಾಗಿ ಜಿಲ್ಲೆಯಲ್ಲಿ **09** ಸಂಚಾರಿ ತಂಡಗಳನ್ನು ರಚಿಸಲಾಗಿದೆ.
- ಜಿಲ್ಲಾ ಆಸ್ಪತ್ರೆ, ಮಡಿಕೇರಿ ಇಲ್ಲಿ **300** ಆಕ್ಸಿಜನೇಟೆಡ್ ಬೆಡ್‌ಗಳಿಗೆ ವ್ಯವಸ್ಥೆ ಮಾಡಿಕೊಂಡಿದ್ದು, ಸುಸಜ್ಜಿತವಾದ **56 ಐ.ಸಿ.ಯು ಬೆಡ್** ಮತ್ತು **43 ವೆಂಟಿಲೇಟರ್**‌ಗಳನ್ನು ಹೊಂದಲಾಗಿದೆ.
- ಜಿಲ್ಲೆಯಲ್ಲಿ **32** ಅಂಬುಲೆನ್ಸ್ ವಾಹನಗಳಿದ್ದು, ಗಂಟಲು/ಮೂಗು ದ್ರವ ಸಂಗ್ರಹಣೆಗಾಗಿ **5** ಹಾಗೂ ಶವ ಸಾಗಾಣಿಕೆಗಾಗಿ **4** ವಾಹನಗಳನ್ನು ಮೀಸಲಿಡಲಾಗಿದೆ.
- ಅಲ್ಲದೇ ಗಂಭೀರ ಸ್ವರೂಪದ ಸೋಂಕಿತರ ಸೇವೆಗಾಗಿ **ಹೈಟೆಕ್ ಮಾದರಿಯ ಆಂಬುಲೆನ್ಸ್ ವಾಹನಗಳನ್ನು** ಸಜ್ಜುಗೊಳಿಸಲು ಕ್ರಮವಹಿಸಲಾಗುತ್ತಿದೆ.
- ಜಿಲ್ಲೆಯಲ್ಲಿ **05 ಡಿ.ಸಿ.ಹೆಚ್**.ಸಿ ಗಳು ಸೋಂಕಿತರ ಚಿಕಿತ್ಸೆಗೆ ಲಭ್ಯವಿರುತ್ತವೆ. **ಜಿಲ್ಲಾ ಆಸ್ಪತ್ರೆ-150**ಬೆಡ್‌ಗಳು, **ಸೋಮವಾರಪೇಟೆ (ತಾಲ್ಲೂಕು ಆಸ್ಪತ್ರೆ)-50** ಬೆಡ್‌ಗಳು, **ವಿರಾಜಪೇಟೆ (ತಾಲ್ಲೂಕು ಆಸ್ಪತ್ರೆ)-50** ಬೆಡ್‌ಗಳು, **ಪಾಲಿಬೆಟ್ಟ-30** ಬೆಡ್‌ಗಳು, ಹಾಗೂ **ಕುಟ್ಟ- 30** ಬೆಡ್‌ಗಳು **ಒಟ್ಟಾರೆ-310** ಬೆಡ್‌ಗಳು).
- **ದಿನಾಂಕ: 15.05.2021ರಂದು ಮಡಿಕೇರಿ ಮೆಡಿಕಲ್ ಕಾಲೇಜಿನಲ್ಲಿ 100 ಹಾಸಿಗೆಗಳ ಡಿ.ಸಿ.ಹೆಚ್.ಸಿಕೇಂದ್ರವನ್ನು ಉದ್ಘಾಟಿಸಲಾಗಿದ್ದು**, ಇದಕ್ಕಾಗಿ **87** ಆಕ್ಸಿಜನ್ ಕಾನ್ಸಂಟ್ರೇಟರ್‌ಗಳನ್ನು ಒದಗಿಸಲಾಗಿದೆ.
- **ಐ.ಸಿ.ಯು.** ಘಟಕದಲ್ಲಿ **ನವಜಾತ ಶಿಶುಗಳಿಗೆ** ಹಾಗೂ **ನಾನ್ ಕೋವಿಡ್ ರೋಗಿಗಳ ಡಯಾಲಿಸಿಸ್**‌ಗೆ ಪ್ರತ್ಯೇಕವಾದ ಸೌಲಭ್ಯ ಕಲ್ಪಿಸಲಾಗಿದೆ.
- ಜಿಲ್ಲೆಯಲ್ಲಿ **13 ಸಾವಿರ ಲೀಟರ್** ಸಾಮರ್ಥ್ಯದ ಲಿಕ್ವಿಡ್ ಆಕ್ಸಿಜನ್ ಸಂಗ್ರಹಣಾ ಘಟಕವನ್ನು ಸ್ಥಾಪಿಸಲಾಗಿದ್ದು, ಪ್ರತಿನಿತ್ಯ ಸರಾಸರಿ **4 ಸಾವಿರಲೀಟರ್** ಆಮ್ಲಜನಕ ಅವಶ್ಯವಿದೆ.
- ಜಿಲ್ಲೆಗೆ ನಿಗದಿಯಾಗಿದ್ದ ಆಕ್ಸಿಜನ್ ಹಂಚಿಕೆ ಪ್ರಮಾಣವನ್ನು **3500** ಲೀ.ನಿಂದ **6000** ಲೀ.ಗೆ ಹೆಚ್ಚಿಸಲಾಗಿದೆ. ಇದರಿಂದ ಜಿಲ್ಲೆಗೆ ಸಾಕಷ್ಟು ಪ್ರಮಾಣದ ಆಕ್ಸಿಜನ್ ಲಭ್ಯವಾಗಲಿದೆ.
- ಹಾಲಿ ಇದ್ದ **03** ಕೋವಿಡ್ ಕೇರ್ ಸೆಂಟರ್‌ಗಳ ಜೊತೆಗೆ ಹೆಚ್ಚುವರಿಯಾಗಿ **03** ಕೋವಿಡ್ ಕೇರ್ ಸೆಂಟರ್‌ಗಳನ್ನು ತೆರೆಯಲಾಗಿದೆ.
- ಹೋಮ್ ಐಸೋಲೇಶನ್‌ನಲ್ಲಿರುವ ವ್ಯಕ್ತಿಗಳು ಮನೆಗಳಿಂದ ಹೊರಬಂದು ಅಡ್ಡಾಡದಂತೆ ನಿಗಾವಹಿಸಲು ಹೋಬಳಿಗೆ ಒಬ್ಬರಂತೆ **16** ಮಂದಿ ನೋಡಲ್ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ.
- ಹೋಮ್ ಐಸೋಲೇಷನ್‌ನಲ್ಲಿರುವ ವ್ಯಕ್ತಿಗಳನ್ನು ಗುರುತಿಸುವ ಸಲುವಾಗಿ ಅವರುಗಳ ಕೈಗೆ ಸೀಲ್ ಹಾಕಲಾಗುತ್ತಿದೆ.
- ಹೊರ ರಾಜ್ಯ/ಜಿಲ್ಲೆಯಿಂದ ಬಂದ ವ್ಯಕ್ತಿಗಳು **14** ದಿನ ಕಡ್ಡಾಯವಾಗಿ ಹೋಮ್ ಕ್ವಾರಂಟೈನ್‌ನಲ್ಲಿರಲು ಆದೇಶಿಸಲಾಗಿದೆ. ಅವರಿಗೂ ಕೂಡ ಸೀಲ್ ಹಾಕಲು ಸೂಚಿಸಲಾಗಿದೆ.